# ಕಾನನ

## ನಿಸರ್ಗದೆಡೆಗೆ ಪಯಣ

ಮುಖಪುಟ

ಅಣಬೆ



ಆಗಸ್ಟ್ 2016

WILDLIFE CONSERVATION GROUP



* ಬೆಂಗ್ಳೂರ್ ಕೆರೆಗಳು . . .!
* ತಾತ ಕಲಿಸಿದ ಪಕ್ಷಿ ಪ್ರೇಮ
* ಚಲಿಸುವ ಮೊಟ್ಟೆಗಳು
* ನಾನು ನೀನುಗಳಿಲ್ಲ (ಕವನ)
* ಪ್ರಕೃತಿ ಬಿಂಬ

**ಲೇಖಕ ವೃಂದ**

ಅಶ್ವಥ .ಕೆ .ಎನ್

ಜೆ. ಅಶೋಕ್ ಕುಮಾರ್

ಜೈಕುಮಾರ .ಆರ್

ಕೃಷ್ಣನಾಯಕ್

ವಿಪಿನ್ ಬಾಳಿಗ

**ವಿನ್ಯಾಸ**

ಅಶ್ವಥ .ಕೆ.ಎನ್

**ಮುಖಪುಟ ಛಾಯಾಚಿತ್ರ**

ಕಾರ್ತಿಕ್ .ಎ.ಕೆ

**ಪರಿಷ್ಕರಣೆ**

ಮುರಳಿ .ಎಸ್

# ಬೆಂಗ್ಳೂರ್ ಕೆರೆಗಳು...!



ಮೊನ್ನೆ. . .ಮೊನ್ನೆ! ನಮ್ಮೂರಿನಲ್ಲಿ ಗಣೇಶ ಚತುರ್ಥಿಯ ಪ್ರಯುಕ್ತ ಎಲ್ಲ ಯುವ ಪೀಳಿಗೆಯವರನ್ನು ಮೀಟಿಂಗ್ ಗೆ ಕರೆಯಲಾಯಿತು, ಗಣೇಶ ಉತ್ಸವ ಈ ವರ್ಷ ಹೇಗೆ ಆಚರಣೆ ಮಾಡುವುದು? ಯಾವ್ಯಾವ ಕೆಲಸಗಳು ಯಾರಾರಿಗೆ ಒಪ್ಪಿಸುವುದು ಎಲ್ಲವನ್ನು ಚರ್ಚಿಸಲಾಯಿತು. ಅದರಲ್ಲಿ ನನ್ನ ಪಾಲಿಗೆ ಸಿಕ್ಕ ಕೆಲಸ ಗಣೇಶಮೂರ್ತಿಯನ್ನು ಮಾಡಿಸುವುದು, ಗಣೇಶನ ಮೂರ್ತಿಯನ್ನೇನೊ ನನ್ನ ಸ್ನೇಹಿತನೇ ಆದ ಶಿವಮಾದ ಮಾಡಿಕೊಡುತ್ತಾನೆ. ಆದರೆ ಅವನಿಗೆ ಬೇಕಾದ ವಸ್ತುಗಳನ್ನು ಪೂರೈಸುವುದು ನನ್ನ ಪಾಲಿಗೆ ಸೇರಿದ್ದು. ಅಂದರೆ ನಾನೊಬ್ಬನೇ ಎಲ್ಲವನ್ನು ಮಾಡೋದಿಲ್ಲ, ನನ್ನ ಜೊತೆ ಇನ್ನೂ ಕೆಲ ಸ್ನೇಹಿತರು ಇರುತ್ತಾರೆ ಬಿಡಿ!.

ಇನ್ನೂ ಶಿವಮಾದನ ಬಗ್ಗೆ ಹೇಳುವುದಾದರೆ, ಅವನ ಕೆಲಸ ಮಣ್ಣಿನಲ್ಲಿ ವಿವಿಧ ರೀತಿಯ ಬೊಂಬೆಗಳನ್ನು ಮಾಡುವುದು, ಅವನು ಬೊಂಬೆ ಮಾಡೋಕೆಲಸವನ್ನು ಹಣ ಮಾಡಿ ಬದುಕಬೇಕೆಂದು ಮಾಡಿಕೊಂಡಿಲ್ಲ, ಶಾಲೆಯಲ್ಲಿ ಓದುತ್ತಿದ್ದಾಗ ಬೊಂಬೆ ಮಾಡುವವ ಪ್ರವೃತ್ತಿ ಇತ್ತು, ಕಲಾವಿದರಾದ ಬಿ.ಕೆ.ಸೋಮಶೇಖರ್ ಬಳಿ ಬೊಂಬೆಮಾಡೋದನ್ನ ಕಲಿತ. ಬರುಬರುತ್ತಾ ಪ್ರವೃತ್ತಿ ಹೋಗಿ ವೃತ್ತಿಯಾಗಿ ಅನ್ನ, ಊಟ, ಬಟ್ಟೆ, ಬದುಕು ಎಲ್ಲವನ್ನೂ ನೋಡಿಕೊಳ್ಳುತ್ತಿದೆ. ನಮ್ಮೂರಿನ ಗಣೇಶನ ಚತುರ್ಥಿಗೆ ಅವನೇ ಪ್ರತಿವರ್ಷ ಗಣೇಶನನ್ನು ಮಾಡಿಕೊಡುವುದು, ಈ ಬಾರಿಯೂ ಮಾಡಿಕೊಡಲು ಒಪ್ಪಿಕೊಂಡ. ಆದರೆ ಗಣೇಶ ಮಾಡಲು ಮಣ್ಣು ತಂದುಕೊಡಿ ಮಾಡಿಕೊಡುತ್ತೇನೆ ಎಂದ. ಇದು ತುಂಬ ಪಜೀತಿಕೆಲಸವೇ ಆಯಿತು...!



ಬೆಂಗಳೂರಿನಂತಹ ಮಹಾನಗರದಲ್ಲಿ ಕೆರೆಗಳನ್ನು ಜನ ಕಬಳಿಸಿ ನುಂಗಿ-ನೀರು ಕುಡಿದಾಗಿದೆ! ಇನ್ನು ಕೆರೆಗಳೆಲ್ಲಿವೆ. ಇದ್ದಬದ್ದ ಕೆರೆಗಳು ರಸ್ತೆಗಳಾಗಿ, ವಾಸದ ಬಡಾವಣೆಗಳಾಗಿ, ಆಟದ ಮೈದಾನಗಳಾಗಿ, ಬಸ್ಸು ನಿಲ್ದಾಣಗಳಾಗಿರುವಾಗ ಇನ್ನೆಲ್ಲಿ ಕೆರೆಗಳು. ಮಳೆಯೇ ಇಲ್ಲದ ಈ ಕಾಲದಲ್ಲಿ ಇನ್ನೆಲ್ಲಿ ಕೆರೆಗಳಲ್ಲಿ ನೀರು! ಇನ್ನೇಲ್ಲಿ ಕೆರೆಯಲ್ಲಿನ ಜೇಡಿಮಣ್ಣು!. "ಏನ್ ಶಿವ್ ಮಾದ. . .ನಮ್ಮ ಸುತ್ ಮುತ್ತ ಇರೊ ಕೆರೆಗಳಲ್ಲಿ ಇರೊ ಮಣ್ಣೆಲ್ಲ ಇಟ್ಟಿಗೆಗಳಾಗಿ ಬೆಂಗ್ಳೂರಿನ ಯಾವುದೊ ಅಪಾರ್ಟಮೆಂಟ್ ಗಳಾಗಿ ಹೋಗಿವೆ, ಇನ್ನೋ ಮಣ್ಣು ಸಿಗು ಅಂದ್ರೆ ಅದು ಎಲ್ಲಿಂದ ಸಿಗಬೇಕು ಮಾರಾಯ!. ಬೆಂಗ್ಳೂರಲ್ಲಿ ಅಂದ್ರೆ ಬಿಬಿಎಂಪಿಯ 741 ಚದುರ ಕಿಮೀ ಪ್ರದೇಶದಲ್ಲಿ 1961 ರಲ್ಲಿ 262 ಕೆರೆಗಳನ್ನು ಗುರುತಿಸಲಾಗಿತ್ತು. ಆದರೆ ಈಗ ಬರಿ 190 ಕೆರೆಗಳಿವೆ.



ಬಿಬಿಎಂಪಿಯ ಬೊಮ್ಮನಹಳ್ಳಿ ವಲಯದಲ್ಲಿ 49 ಕೆರೆಗಳು 778.71 ಹೆಕ್ಟೇರ್ ಪ್ರದೇಶ. ಬ್ಯಾಟರಾಯನಪುರ ವಲಯದಲ್ಲಿ 31 ಕೆರೆಗಳಿದ್ದು 614.36 ಹೆಕ್ಟೇರ್ ಪ್ರದೇಶ, ದಾಸರಹಳ್ಳಿ ವಲಯದಲ್ಲಿ 18 ಕೆರೆಗಳಿದ್ದು 124.76 ಹೆಕ್ಟೇರ್ ಪ್ರದೇಶ. ಬೆಂಗಳೂರು ಪೂರ್ವ 9 ಕೆರೆಗಳಿದ್ದು 86 ಹೆಕ್ಟೇರ್ ಪ್ರದೇಶ. ಮಹದೇವಪುರ ವಲಯದಲ್ಲಿ 42 ಕೆರೆಗಳು, 552 ಹೆಕ್ಟೇರ್ ಪ್ರದೇಶ. ರಾಜರಾಜೇಶ್ವರಿ ನಗರ ವಲಯದಲ್ಲಿ 26 ಕೆರೆಗಳು, 143 ಹೇಕ್ಟರ್ ಪ್ರದೇಶ. ಬೆಂಗಳೂರು ದಕ್ಷಿಣ ವಲಯದಲ್ಲಿ 11 ಕೆರೆಗಳಿದ್ದು, 75 ಹೆಕ್ಟೇರ್ ಪ್ರದೇಶ ಮತ್ತು ಬೆಂಗಳೂರು ಪಶ್ಚಿಮ ವಲಯದಲ್ಲಿ 4 ಕೆರೆಗಳು, 51 ಹೆಕ್ಟೇರ್ ಪ್ರದೇಶ ಹೊಂದಿದೆ" ಎಂದು ಕೆರೆಗಳ ರಿಪೋರ್ಟ್ ತೆಗೆದು ಹೇಳಲು ಶುರುಮಾಡಿದೆ. "ಹೋ....ಅದೆಲ್ಲ ಕತೆ ನಂಗೆ ಯಾಕೆ ಬೇಕು...! ಜೇಡಿಮಣ್ಣು ತಂದುಕೊಡಿ, ಗಣೇಶ ಮಾಡಿ ಕೊಡ್ತೀನಿ" ಎಂದ ಶಿವಮಾದ. "ಹೇ....ಏನ್

ಶಿವ್ ಮಾದ ನೀನು, ಯಾವ್ ಕೇರೆಲಿ ಮಣ್ಣಿದೆ ಹೇಳು ಮಾರಾಯ ನೀನೇ. . .! ಹೋಗಿ ತರ್ತಿನೀ, ನಂಗಂತೂ ಗೊತ್ತಿಲ್ಲ" ಎಂದೆ.



"ನಾವೆಲ್ಲ ಬೊಂಬೆ ಮಾಡೋಕೆ ಕಗ್ಗಲೀಪುರದ ಕೆರೇಲಿ ತರೋದು, ಅಲ್ಲಿ ಹೋಗಿ ಸಿಗುತ್ತೆ" ಎಂದ. ಮಾರನೆ ದಿನ ಕಾರ್ ತಗೊಂಡು ನಾನು, ರಾಮು, ಸೋಮ ಮತ್ತು ರಘು ಸಾಹೇಬ ಎಲ್ಲ ಕೆರೆ ಹುಡುಕಿಕೊಂಡು ಹೋದ್ವಿ. ನಮ್ಮೂರಿಂದ ಸುಮಾರು ಇಪ್ಪತ್ತೈದು ಕಿಲೋಮೀಟರ್ ದೂರ ಹೋಗ್ಬೇಕು, ಕಗ್ಗಲೀಪುರಕ್ಕೆ ಹೋಗಿ ಕೆರೆಯನ್ನು ಹುಡುಕಿದ್ದೂ ಆಯಿತು. ಸ್ವಲ್ಪ ದೂರದಿಂದ ನೋಡಿದಾಗ ಆ ಕೆರೆಯಲ್ಲಿ ಈ ಮಳೆಯೇ ಇಲ್ಲದ ಕಾಲದಲ್ಲಿ ನೀರು ತುಂಬಿದ್ದನ್ನು ಕಂಡು ಆಶ್ಚರ್ಯವಾಯಿತು. ಹತ್ತಿರ ಹೋಗುತ್ತಾ ಹೋಗುತ್ತಾ ವಾಸನೆ, ದುರ್ವಾಸನೆ ಮೂಗು ಮುಚ್ಚಿಕೊಂಡು ಹೋಗುವ ಸ್ಥಿತಿ ಬಂದಿತು. ಅಲ್ಲಿ ಕೆರೆಯ ಕಟ್ಟೆಯಮೇಲಿಂದ ನೀರಿಗೆ ಈ ಕೋಳಿ ಕಸಾಯಿಖಾನೆಯ ಗಲೀಜನ್ನು ತಂದು ಸುರಿಯುತ್ತಾರೆ. ಸುತ್ತ ಇರುವ ಕೆಲ ಕಾರ್ಖಾನೆಗಳಿಂದ ಮಲಿನಗೊಂಡ ನೀರನ್ನು ನೇರ ಕೆರೆಗಳಿಗೆ ಬಿಡುವುದು, ಪಕ್ಕದ ಊರಿನ ಒಳಚರಂಡಿಯ ಮಲ-ಮೂತ್ರ, ಮೋರಿ, ಸಾಬೂನು ನೀರನ್ನು ನೇರವಾಗಿ ಕೆರೆಗೆ ಬಿಡುವುದರಿಂದ ಮಳೆಯಿಲ್ಲದಿದ್ದರೂ ಕೂಡ ಕೆರೆಯಲ್ಲಿ ಸದಾ ಹಸಿರು ನೀರುತುಂಬಿರಲು ಕಾರಣವಾಗಿದೆ. ಈ ಬೆಂಗ್ಳೂರಿನ ಕೆರೆಗಳೆಲ್ಲ ಹೀಗೆಯೇ ಬಿಡಿ! ವರದಿಗಳ ಪ್ರಕಾರ ಕೇವಲ 16 ಕೆರೆಗಳು ಮಾತ್ರ ಸುಸ್ಥಿತಿಯಲ್ಲಿವೆ ಎನ್ನುತ್ತಾರೆ, ಅದೇನೋ ನನಗಂತು ಗೊತ್ತಿಲ್ಲ. ಮತ್ತೆ ಒಮ್ಮೊಮ್ಮೆ ಪತ್ರಿಕೆಗಳಲ್ಲಿ ನೋಡಿರಬೇಕು ವರ್ತೂರು ಕೆರೆ, ಬೆಳ್ಳಂಡೂರು ಕೆರೆಗಳಲ್ಲಿ ನೊರೆಯ ಸಮಸ್ಯೆ ಬಗ್ಗೆ, ಮತ್ತೆ ಕೆಲ ಕೆರೆಗಳಲ್ಲಿ ಮೀನುಗಳ ಮಾರಣ ಹೋಮವಾಗಿರುವ ಬಗ್ಗೆ,ಹೀಗೆ  ಒಂದಲ್ಲ ಎರಡಲ್ಲ ನೂರಾರು ಸಮಸ್ಯೆಗಳು, ಈ ಬಯೋಲಾಜಿಕಲ್ ಆಕ್ಸಿಜನ್ ಡಿಮಾಂಡ್ (BOD) ಏನ್ ಅಂಥ ಕರೆಯುತ್ತಾರೆ, ಅದು ಸಾಮಾನ್ಯ ನೀರಿಗೆ 20 ಇದ್ದರೆ ಶುದ್ಧ ಎಂದರ್ಥ. ಆದರೆ ಅದು ಈ ಬೆಂಗಳೂರಿನ ಕೆರೆಗಳಲ್ಲಿ 450 ರಿಂದ 500 ಮೀರಿ ಉಸಿರು ಗಟ್ಟುವ ವಾತಾವರಣ ಸೃಷ್ಟಿಯಾಗಿ ಮೀನುಗಳ ಮಾರಣಹೋಮ

ಆಗಾಗ ನಡೆಯುವುದು ಸರ್ವೇಸಾಮಾನ್ಯ, ಇಂತಹ ಸಂದರ್ಭಗಳಲ್ಲಿ ಸೊಳ್ಳೆಗಳ ಉತ್ಪತ್ತಿಯೂ ಹೆಚ್ಚಾಗುತ್ತದೆ.ಇಂದು ಒಟ್ಟಾರೆ, ಕೆರೆಗಳು ಗಬ್ಬುನಾರುವ ತಿಪ್ಪೆಗುಂಡಿಗಳಾಗಿ ಮಾರ್ಪಾಡಾಗಿವೆ.

ಪರಿಸರತಜ್ಞ ನಾಗೇಶ್ ಹೆಗಡೆಯವರು ತುಂಬ ಚೆನ್ನಾಗಿ ಒಂದು ಮಾತನ್ನ ಹೇಳುವುದುಂಟು "ನಮ್ಮಲ್ಲಿ ಬೆಂಗ್ಳೂರಿನ ಕೆರೆ ಅಂದ್ರೆ!, ಮಹಾಭಾರತದಲ್ಲಿ ಸಭಾ ಪರ್ವದಲ್ಲಿ ದ್ರೌಪದಿಯ ಮಾನಭಂಗವಾಗುತ್ತಿರುತ್ತೆ, ಐದು ಮಂದಿ ಗಂಡಂದಿರು ಇದ್ದರೂ ಕೂಡ, ಎಲ್ಲರ ಕಣ್ಣೆದುರು ಅವಳ ಮಾನ ಹೋಗುವ ಸ್ಥಿತಿ ಬಂದಿರುತ್ತೆ. ಈ ಬೆಂಗ್ಳೂರಿನ ಕೆರೆಗಳು ಕೂಡ ಹಾಗೆಯೇ!, ಕೆರೆ ಅಭಿವೃದ್ಧಿ ಪ್ರಾಧಿಕಾರ, ಮಾಲಿನ್ಯ ನಿಯಂತ್ರಣ ಮಂಡಳಿ, ಜಲಮಂಡಳಿ, ಅರಣ್ಯ ಇಲಾಖೆ, ರೆವೆನ್ಯೂ ಇಲಾಖೆ, ಬಿಡಿಎ, ಬಿಬಿಎಂಪಿ ಹೀಗೆ ಏಳು ಮಂದಿ ಅದನ್ನ ನಿಯಂತ್ರಣ ಮಾಡೋ ಗಂಡಂದಿರು, ಒಂದೊಂದು ಕೆರೆಗೆ ಏಳು ಸಂಸ್ಥೆಗಳು ಅದರ ಮೇಲ್ವಿಚಾರಣೆ ಜವಾಬ್ಧಾರಿ ವಹಿಸಿಕೊಂಡಿವೆ. ಹಾಗಾಗಿ ಯಾರಿಗೂ ಉತ್ತರದಾಯತ್ವ ಅನ್ನೊದು ಇಲ್ಲ, ಅವರು ಮಾಡ್ತಾರೆ ಅಂಥ ಇವರು, ಇವರು ಮಾಡ್ತಾರೆ ಅಂಥ ಅವರು, ಯಾರು ಏನೂ ಮಾಡದೆ ಕೆರೆಗಳು ತುಂಬ ದುಸ್ಥಿತಿಗೆ ಬಂದಿವೆ". ಅಂಥ ಹೇಳ್ತಾರೆ.



ಇನ್ನೂ ಬೆಂಗ್ಳೂರಿನ ಅನೇಕ ಕೆರೆಗಳು ಮಾಯಾವಾಗಿವೆ!, ಚಲ್ಲಘಟ್ಟ ಕೆರೆಯನ್ನು ಕರ್ನಾಟಕ ಘಲ್ಫ್ ಅಸೋಸಿಯಷನ್ ಗೆ, ಕೋಡಿಹಳ್ಳಿ ಕೆರೆಯನ್ನು ಇಸ್ರೋಗೆ, ದೊರಸಾನಿಪಾಳ್ಯ ಕೆರೆಯನ್ನು ವಾಸದ ಬಡವಾಣೆಗೆ, ದೋರಸಾನಿಪಾಳ್ಯ ಕುಂಟೆಯನ್ನು ಪೋರ್ಟಿಸ್ ಆಸ್ಪತ್ರೆಗೆ, ಬಿಕಸ್ಪುರ ಕೆರೆಯನ್ನು ಇಸ್ರೋಲೇಔಟ್ ಪಾರ್ಕ್, ಕಾಮಾಕ್ಷಿಪಾಳ್ಯ ಕೆರೆಯನ್ನು ಆಟದ ಮೈದಾನವಾಗಿ, ಧರ್ಮಂಬುದಿ ಕೆರೆಯನ್ನು ಬಸ್ಸ್ ನಿಲ್ದಾಣವಾಗಿ ಮತ್ತು ಜರಗನಹಳ್ಳಿ ಕೆರೆಯನ್ನು ಸರ್ಕಾರಿ ಪ್ರೌಢಶಾಲೆಯ ಆಟದ ಮೈದಾನಕ್ಕೆ ಹೀಗೆ 46 ಕೆರೆಗಳನ್ನು ಈ ನಮ್ಮ ಘನ ಸರ್ಕಾರಗಳು ಬೇರೆ ಬೇರೆ ಇಲಾಖೆಗಳಿಗೆ ಹರಿದು ಹಂಚಿ ಧಾನಮಾಡಿದೆ.



ಸೋಮನು "ನೀನು ಗಣೇಶನ್ ಮಾಡು ಅಂದ್ರೆ ಅವರ ಅಪ್ಪನ ಮಾಡ್ತಿಯಲ್ಲ ಮಾರಾಯ!, ಹೇಳಿದ ಕೆಲಸನ್ನ ಮಾಡೋದು ಬಿಟ್ಟು ಇದ್ಯಾವುದೋ ಕಥೆ ಪುರಾಣ ಎಲ್ಲಾ ಹೇಳ್ತಿಯ ನೀನು. ನಿನ್ನನ್ನಾ ಕೆರೆಗೆ ಮಣ್ಣು ತರೋಕ್ಕೆ ಕರ್ಕೊಂಡ್ ಬಂದಿದು ತಪ್ಪಾಯ್ತು ನೋಡು!, ಮೊದಲು ಮಣ್ಣ್ ತೆಗೆಯೊ ಕೆಲಸ ಮಾಡು ಮಾರಾಯ" ಎಂದ. ಈ ಗಬ್ಬು ಕೆರೆಯಲ್ಲಿ ಮಣ್ಣು ತಂದು ಗಣೇಶ ಮಾಡಿದ್ರೆ ಏನೂ, ಬಿಟ್ರೇನೂ ಅನಿಸ್ತು. ಆದ್ರೂ ಏನ್ ಮಾಡೋದು ಗಣೇಶ ಮಾಡ್ಲೇಬೇಕಲ್ಲ!. ಕೆರೆಯೆಲ್ಲ ಹುಡಿಕಿದ್ರು ಗಣೇಶಮಾಡೋ ಯೋಗ್ಯಮಣ್ಣು ಕೇರೆಲಿ ಎಲ್ಲೂ ಸಿಗಲ್ಲಿಲ್ಲ!. ಈ ಶಿವಮಾದ ಅದ್ಯಾವ್ ಕೆರೆ ಹೇಳ್ದ ಮಾರಾಯ ಎಂದು ಮನಸ್ಸಿನಲ್ಲೇ ಶಾಪಹಾಕಿದೆ. ಅಷ್ಟರಲ್ಲಿ ರಾಮು ಇಲ್ಲಿ ಜೇಡಿಮಣ್ಣು ಇದೆ ಬನ್ನಿ  ಎಂದು ಕರೆದ. ಅಲ್ಲಿ ಯಾರೋ ಟೆಲಿಫೋನೊರು ಜೆಸಿಬಿಲಿ ಅಗೆದು ಟೆಲಿಫೋನ್ ತಂತಿಗಳನ್ನು ಮುಚ್ಚಿದ್ರು, ಅದು ಈಗ ಸ್ವಲ್ಪ ನೀರು ತುಂಬಿಕೊಂಡಿದ್ರು ಕೂಡ ಒಂದು ಚಿಕ್ಕ ಜಾಗದಲ್ಲಿ ಸ್ವಲ್ಪ ಮಣ್ಣು ಸಿಗ್ತು. ಕಷ್ಟಪಟ್ಟು ಅಗೆದು ಎರಡು ಮೂಟೆಗಳಲ್ಲಿ ತುಂಬಿ ಸೋಮನ ಬೆನ್ನಮೇಲೆ ಹಾಕಿ ಅರ್ಧಕಿಲೋಮೀಟರ್ ದೂರ ಇರೋ ಕಾರಿಗೆ ಹೊತ್ತು ತಂದು ಹಾಕಿ, ಅರ್ಧಗಂಟೆ ಬುಸ್ಗುಟ್ಟುತ್ತ ಸುಧಾರಿಸಿಕೊಂಡ. ನೇರ ತಂದು ಶಿವಮಾದನ ಮನೆಗೆ ಹಾಕಿಯಾಯಿತು.

ಈಗ ಗಣೇಶನ ಮಾಡುವ ಬರಾಟೆ ಜೋರಾಗಿ ನಡೆಯುತ್ತಿದೆ.

ಆದರೆ ಬೆಂಗಳೂರಿನ ಬಗ್ಗೆ ಯೋಚನೆ ಮಾಡಿದ್ರೆ!, ಕುಡಿಯುವ ನೀರಿಗೆ ಉಳಿದ ನಗರಗಳಿಗೆ ಇದ್ದಹಾಗೆ ನದಿಗಳಿಲ್ಲ, ಸಮುದ್ರ ಇಲ್ಲ ತುಂಬ ದೂರದಿಂದ ನೀರು ತರಬೇಕಾಗುತ್ತೆ. ಆಗ ನದಿ ಇಲ್ಲದೆ ಇರೋ ಬೆಂಗ್ಳೂರನ್ನ ಹೇಗೆ ನಿರ್ಮಾಣ ಮಾಡಿದ್ರೂ ಅಂದ್ರೆ, ಈ ಕೆರೆಗಳೇ ಆಸ್ತಿಯಾಗಿದ್ದವು. ಈ ಕೆರೆಗಳು ತುಂಬಿಕೊಂಡಿದ್ದರಿಂದ ತೆರೆದ



ಬಾವಿಗಳು ಇದ್ದವು. ಈಗ ಕೆರೆಗಳು ಇಲ್ಲ, ಒಂದೇ ಒಂದು ತೆರೆದ ಭಾವಿಯೂ ಇಲ್ಲ ಬಿಡಿ. ಅಂತರ್ಜಲ ಮಟ್ಟ ತುಂಬ ಎತ್ತರದಲ್ಲಿ ಇತ್ತು, ಬೆಂಗ್ಳೂರಿಗೆ ಜನಸಂಖ್ಯೆ ಹೆಚ್ಚಾದಾಗ ಹೆಸರಘಟ್ಟಕೆರೆಯಿಂದ ನೀರು ತರಲು ಶುರುಮಾಡಿದರು ನಂತರ ತಿಪ್ಪಗೊಂಡನಹಳ್ಳಿಕೆರೆಯಿಂದ ನೀರು ತರುವುದಕ್ಕೆ ಶುರು ಆಯಿತು. 1976 ರ ವರಿಗೂ ಬೆಂಗಳೂರಿನ ಕೆರೆಗಳೇ ನೀರನ್ನು ಉಣಿಸುತ್ತಿದ್ದವು. ಮತ್ತು ಎಲ್ಲ ಅಗತ್ಯಗಳಿಗೂ ಪೂರೈಕೆ ಮಾಡುತ್ತಿದ್ದವು. ಆದರೆ ಜನಸಂಖ್ಯೆ ಹೆಚ್ಚಾಗುತ್ತಾ ಹೋದಂತೆ ನೂರಾರು ಕಿಲೋಮೀಟರ್ ದೂರದ ಕಾವೇರಿನದಿಯಿಂದ ನೀರು ತರುಲೂ ಶುರುಮಾಡಿ. ಕಾವೇರಿ ಮೊದಲನೇ ಹಂತ ಆಯಿತು, ಎರಡನೇ ಹಂತ ಆಯಿತು, ಮೂರನೇ ಹಂತ ಆಯಿತು ಈಗ ನಾಲ್ಕನೇ ಹಂತಕ್ಕೆ ಬಂದುಬಿಟ್ಟಿದ್ದೇವೆ. ಮುಂದೆ ಇಡೀ ಕಾವೇರಿ ನದಿಯನ್ನೇ ತಿರುಗಿಸುವ ಪರಿಸ್ಥಿತಿ ಬಂದಿದೆ. ಆದ್ರೆ ಇನ್ನು ಕಾವೇರಿ ನದಿಯಿಂದ ನೀರು ತರಲೂ ಸಾಧ್ಯವಿಲ್ಲ, ಸುಪ್ರೀಮ್ ಕೋರ್ಟ್ ಕೂಡ ಹೇಳಿಯಾಗಿದೆ ನಾಲ್ಕನೇ ಹಂತವೇ ಕೊನೆ ಎಂದು. ಹಾಗಾದ್ರೆ ಈ ಬೆಳೆಯುತ್ತಿರುವ ಬೆಂಗಳೂರಿಗೆ ನೀರು ಎಲ್ಲಿಂದ ತರೋದು!. ಇನ್ನೊಂದು ದೊಡ್ಡ ಅಪಾಯ ಬರ್ತಾ ಇದೆ. ಗ್ಲೋಬಲ್ ವಾರ್ಮಿಂಗ್, ಬೆಂಗಳೂರಿನ ತಾಪಾಮಾನ ಹೆಚ್ಚಾಗುತ್ತಿದೆ, ಅಂತರ್ಜಲ ಮಟ್ಟ ತಳ ಮುಟ್ಟಿದೆ. ಹಾಗಾಗಿ ಕೆರೆಗಳನ್ನು ಅನಿವಾರ್ಯವಾಗಿ ಉಳಿಸಿಕೊಳ್ಳಬೇಕಾಗಿದೆ. ಉಳಿಸಿಕೊಳ್ಳುವುದೇ ಅಷ್ಟೆ ಅಲ್ಲ, ಅವುಗಳ ಮರುಸಂವರ್ಧನೆ ಮಾಡಬೇಕಾಗಿದೆ. ಅವುಗಳ ನೀರನ್ನು ಮತ್ತೆ ದಿನ ಬಳಕೆಗೆ ಬರುವಂತೆ ಮಾಡಿಕೊಳ್ಳಬೇಕಾಗಿದೆ. ಜನ ಇದು ನಮ್ಮ್ ಕೆರೆ, ನಮ್ಮ್ ನೀರು, ನಮ್ಮ್ ಜಾಗ ಅನ್ನೋ ಭಾವನೆ, ಪ್ರೀತಿ ಇಲ್ಲ ಅಂದ್ರೆ. ಗಣೇಶನ ವಿಸರ್ಜನೆ ಇರಲಿ ಕುಡಿಯೋದಕ್ಕೆ ನೀರು ಸಿಗೋದಿಲ್ಲ ಬಿಡಿ!.

- ಅಶ್ವಥ .ಕೆ .ಎನ್





# ತಾತ ಕಲಿಸಿದ ಪಕ್ಷಿ ಪ್ರೇಮ

ಪರಿಸರವಾದಿಗಳು ಕೆಲ ಪ್ರಾಣಿ, ಪಕ್ಷಿಗಳು ಅಳಿವಿನ ಅಂಚಿನಲ್ಲಿ ಇವೆ ಎಂದು ಆತಂಕಪಡುತ್ತಿರುತ್ತಾರೆ. ಆದರೆ ನಮ್ಮ ಜನರು ಅದನ್ನು ಲೆಕ್ಕಿಸದೆ ಅವರ ಸ್ವಾರ್ಥಕ್ಕಾಗಿ ಅವುಗಳನ್ನು ನಾಶಮಾಡುವ ಕೆಲಸ ಮಾಡುತ್ತಾರೆ. ನಾವು ಮಾಡುತ್ತಿರುವುದು ತಪ್ಪು ಎಂದು ಅವರಿಗೆ ಗೊತ್ತಿದ್ದು ಹಾಗೆ ಮಾಡುತ್ತಿದ್ದಾರೆ. ನಾವು ಚಿಕ್ಕವರಾಗಿದ್ದಾಗ ಆರೀತಿಯ ತಪ್ಪುಗಳನ್ನು ಗೊತ್ತಿಲ್ಲದೆ ಮಾಡುತ್ತಿದ್ದೆವು. ನಮ್ಮ ತಾತ ಹೇಳಿದ ಬುದ್ದಿವಾದದಿಂದ ನಾನು ತಪ್ಪು ತಿದ್ದಿಕೊಂಡೆನು. ನಾನು ಮಾಡಿದ ತಪ್ಪಾದರು ಏನು? ನಮ್ಮ ತಾತ ನನಗೆ ಹೇಳಿದ ಬುದ್ದಿವಾದ ಏನು? ಅದರ ಬಗ್ಗೆ ಕೆಳಗೆ ವಿವರಿಸಿದ್ದೇನೆ ಓದಿ.

ನಾನು ಪ್ರಾಥಮಿಕ ಶಾಲೆಯನ್ನು ನಮ್ಮ ಅಜ್ಜಿಯ ಊರಿನಲ್ಲಿ ಓದಬೇಕಾದರೆ ನನಗೆ ಒಂದು ಕೆಟ್ಟ ಅಭ್ಯಾಸವಿತ್ತು. ಅದು ಏನು ಅಂದರೆ ನಮ್ಮ ಅಜ್ಜಿಯ ಊರಿನಲ್ಲಿ ಆಗ ಕಲ್ಲಿನ ಕೆಲವು ಮನೆಗಳು ಇದ್ದವು. ಅವುಗಳ ಸೊಂದಿಗಳಲ್ಲಿ ಪುಟ್ಟ ಗುಬ್ಬಿಪಕ್ಷಿಗಳು ಗೂಡು ಕಟ್ಟಿ ವಾಸ ಮಾಡುತ್ತಿದ್ದೆವು. ಅವು ಗೂಡಿನಲ್ಲಿ ಮೊಟ್ಟೆಗಳನ್ನು ಇಡುತ್ತಿದ್ದವು. ಕೆಲವು ಗುಬ್ಬಿಗೂಡುಗಳಲ್ಲಿ ಪುಟ್ಟ ಪುಟ್ಟ ಮರಿಗಳು ಇರುತ್ತಿದ್ದವು. ಶನಿವಾರ ಮತ್ತು ಭಾನುವಾರ ಬಂದರೆ ಸಾಕು ಎಲ್ಲಾ ಸ್ನೇಹಿತರನ್ನು ಸೇರಿಸಿಕೊಂಡು ಆ ಗುಬ್ಬಿ ಗೂಡುಗಳ ಪರಿಶೀಲನೆ ಮಾಡುವುದು. ಅಂದರೆ ಹಾಳುಮಾಡುವ ಕೆಲಸ ತಪ್ಪದೆ ನಿರ್ವಹಿಸುತ್ತಿದ್ದೆವು. ಅದು ಮುಗಿದ ಮೇಲೆ ತೆಂಗಿನ ಗರಿಯಿಂದ ಬಲೆ ಮಾಡಿ ಊರ ಹೊರಗಡೆ ಹೋಗಿ ಓತಿಕ್ಯಾತದ ತಲೆಗೆ ಬಲೆಹಾಕಿ



ಹಿಡಿದುಬಿಡುವುದು. ಆಮೇಲೆ ಒಬ್ಬನ್ಯಾಯಾಧೀಶ ಅದಕ್ಕೆ ಯಾವ ಶಿಕ್ಷೆಕೊಡುತ್ತಾನೆ ಅದರ ಮೇಲೆ ಅವುಗಳ ಭವಿಷ್ಯ ನಿಂತಿರುತ್ತಿತ್ತು. ನಾನು ನ್ಯಾಯಾಧೀಶನಾದರೆ ಅವುಗಳ ಹಣೆಬರಹ ಚೆನ್ನಾಗಿರುತ್ತಿತ್ತು. ಕಾರಣ ನಾನು ಅದಕ್ಕೆ ಜೀವದಾನದ ಭಾಗ್ಯ ಕರುಣಿಸಿ ಬಿಡುತ್ತಿದ್ದೆನು. ಅದಕ್ಕೆ ನನ್ನ ಸ್ನೇಹಿತರು ನನ್ನನ್ನು ನ್ಯಾಯಾಧೀಶನ ಸ್ಥಾನದಿಂದ ವಜಾ ಮಾಡಿಬಿಟ್ಟರು. ಅನಂತರ ಅವರ ತೀರ್ಪು ಘನ ಘೋರ ಮರಣದಂಡನೆ ಶಿಕ್ಷೆ ಖಾಯಂ. ನಮ್ಮ ದೇಶದಲ್ಲಿ ಸೆರೆ ಸಿಕ್ಕ ಬೇರೆ ದೇಶದ ಉಗ್ರಗಾಮಿಗಳಿಗೂ ಇಷ್ಟು ತ್ವರಿತವಾಗಿ ಶಿಕ್ಷೆ ಘೋಷಣೆ ಆಗುವುದಿಲ್ಲ. ನನ್ನ ಸ್ನೇಹಿತರದ್ದು ಗಲ್ಫ್ ಕಾನೂನು "ಏಕ್ ಮಾರ್ ದೊ ತುಖಡೇ". ಈ ರೀತಿಯ ಕೆಲಸ ಸಿಕ್ಕಾಪಟ್ಟೆ ಮಾಡಿಬಿಟ್ಟಿದ್ದೇವೆ.



ಒಂದು ದಿನ ನಮ್ಮ ವೆಂಕಟಪ್ಪ ತಾತನಿಗೆ ಸಿಕ್ಕಿಬಿದ್ದೆವು, ಆಗಲೇ ತಾತನಿಗೆ ನೂರು ವರ್ಷ ವಯಸ್ಸು. ಆಗ ತಾತ ಕೂರಿಸಿಕೊಂಡು ಪ್ರಾಣಿ-ಪಕ್ಷಿಗಳ ಉಳಿವಿಗೆ ನಮ್ಮ ಪೂರ್ವಿಕರು ಏನೆಲ್ಲಾ ಮಾಡುತ್ತಿದ್ದರು ಎಂಬುದನ್ನು ವಿವರವಾಗಿ ಹೇಳಿದರು. ಅಂದು ನನಗೆ ಬುದ್ಧಿ ಬಂತು. ಆ ತಾತ ಹೇಳಿದ ವಿವರಣೆ ಏನು ಗೊತ್ತಾ? ಹಳೆ ಕಾಲದಲ್ಲಿ ಮನೆಗಳನ್ನು ಕಟ್ಟುವಾಗ ಮನೆಯ ಮುಂದಿನ ಗೋಡೆಗಳಲ್ಲಿ ಎರಡು ಪುಟ್ಟಕಿಂಡಿಗಳನ್ನು ಬಿಡುತ್ತಿದ್ದರು. ಅದು ಏಕೆ ಎಂದು ನನ್ನನ್ನು ಕೇಳಿದರು ನಾನು ಕರೆಂಟ್ ಹೋದರೆ ದೀಪ ಇಡುವುದಕ್ಕೆ ಎಂದು ಉತ್ತರ ಕೊಟ್ಟುಬಿಟ್ಟೆ. ನಾನು ನೋಡಿದಾಗ ಅಲ್ಲಿ ಇಡುತ್ತಿದ್ದದ್ದು ಸೀಮೆಎಣ್ಣೆ ಬುಡ್ಡಿಯನ್ನೆ (ದೀಪ). ಅದಕ್ಕೆ ನಾನು ಆ ರೀತಿಯ ಉತ್ತರ ಕೊಟ್ಟುಬಿಟ್ಟೆನು. ಆಗ ಆ ತಾತ ನಕ್ಕು ಅಯ್ಯೋ ಮಂಕ, ಆಗಿನ ಕಾಲದಲ್ಲಿ ಕರೆಂಟು ಎಲ್ಲಿತ್ತು! ಬರೀ ಮಣ್ಣಿನ ದೀಪಗಳನ್ನು, ಪಂಜುಗಳನ್ನು ಬಳಸುತ್ತಿದ್ದರು. ಹಾಗಾದರೆ ಆ ಕಿಂಡಿಗಳನ್ನು ಏಕೆ ಕಟ್ಟಿದ್ದು ಎಂದು ನಾನು ಕುತೂಹಲದಿಂದ ಕೇಳಿದೆನು.

ಹಿಂದಿನ ಕಾಲದಲ್ಲಿ ಮನೆಗಳನ್ನು ಕಟ್ಟುವಾಗ ಗೋಡೆಯ ಎರಡು ಕಡೆ ಚಿಕ್ಕಕಿಂಡಿ ಏಕೆ ಕಟ್ಟುತ್ತಿದ್ದರು ಎಂದರೆ ಪಕ್ಷಿಗಳು ಗೂಡು ಕಟ್ಟಿಕೊಳ್ಳಲಿ ಎಂಬ ಒಂದು ಉಪಕಾರ ಮನೋಭಾವನೆ. ಆ ಕಾಲದಲ್ಲಿ ಮನೆಗಳನ್ನು ಕಲ್ಲಿನಿಂದ ಕಟ್ಟುತ್ತಿದ್ದರು. ಸಿಮೆಂಟ್ ನಿಂದ ಗೋಡೆಯನ್ನು ಪೂರ್ತಿ ಸೀಲ್ ಮಾಡುತ್ತಿರಲಿಲ್ಲ. ಆಗ ಪಕ್ಷಿಗಳಿಗೆ ಗೂಡು ಕಟ್ಟಿಕೊಳ್ಳಲು ಅನುಕೂಲವಿತ್ತು. ಅದೇ ರೀತಿ ಗುಡಿಸಲುಗಳು ಹಾಗೂ ಮನೆ ಮುಂದಿರುವ ಚಪ್ಪರದಲ್ಲಿ ಗೂಡು ಕಟ್ಟಿಕೊಂಡು ಹಾಯಾಗಿ ವಾಸ ಮಾಡುತ್ತಿದ್ದವು. ಮನೆಯ ಒಳಗೆ ಮತ್ತು ಹೊರಗೆ ಭತ್ತದ ಗೊಂಚಲು ಕಟ್ಟಿರುತ್ತಿದ್ದರಂತೆ ಅಲಂಕಾರಕ್ಕಾಗಿ ಅಲ್ಲ. ಆ ಪಕ್ಷಿಗಳಿಗೆ ಆಹಾರ ಸುಲಭವಾಗಿ ಸಿಗಲಿ ಎನ್ನುವ ಕಾರಣ. ಈಗ ನಾವು ಸ್ವಲ್ಪಯೋಚನೆ ಮಾಡೋಣ. ಈ ಕಾಲದ ಜನರು ಮನೆಗಳನ್ನು ಕಟ್ಟುತ್ತಾರೆ. ಅದರಲ್ಲಿ ಯಾವ ಯಾವ ರೂಮ್ ಗಳು ಇರಬೇಕು ಹಾಗೂ ಷೋಕೇಸ್ ಎಲ್ಲಿ ಇಡಬೇಕು ಎಂದು ಯೋಚಿಸುತ್ತಾರೆ. ಯಾರೂ ಪಕ್ಷಿಗಳಿಗೆ ಗೂಡು ಕಟ್ಟಿಕೊಳ್ಳಲು ಅವಕಾಶ ಕೊಡುವುದಿಲ್ಲ. ಅದರ ಬದಲಾಗಿ ನಮ್ಮ ಇಂಜಿನಿಯರ್ ಸಾಹೇಬರು ಪರಿಸರ

ಹಾಗೂ ಪರಿಸರ ನಂಬಿರುವ ಪಕ್ಷಿಗಳ ಬಗ್ಗೆ ಯೋಚನೆ ಮಾಡಲು ಹೋಗುವುದಿಲ್ಲ. ಎತ್ತರದ ಅಪಾರ್ಟ್ ಮೆಂಟ್ ಕಟ್ಟುತ್ತಾರೆ, ಅದಕ್ಕೆ ತುಂಬಾ ಉದ್ದವಾದ ಗಾಜುಗಳನ್ನು ಫಿಟ್ ಮಾಡುತ್ತಾರೆ. ಸೂರ್ಯನ ಕಿರಣಗಳು ಗಾಜಿನ ಮೇಲೆ ಬಿದ್ದು ಬೆಳಕು ಪ್ರತಿಫಲಿಸಿದರೆ ಶಾಖ ಜಾಸ್ತಿ ಹಿಂದಕ್ಕೆ ಬರುತ್ತದೆ. ಆ ಶಾಖ ತಾಳಲಾರದೆ ಪಕ್ಷಿಗಳು ಅಂತಹ ಪ್ರದೇಶಗಳಿಗೆ ಬರುವುದೇ ಇಲ್ಲ. ಇನ್ನು ಮನೆಯ ಹೊರಗಡೆ ಹಾಗೂ ಒಳಗಡೆ ಪಕ್ಷಿಗಳ ಆಹಾರಕ್ಕಾಗಿ ಭತ್ತದ ಗೊಂಚಲು ಇಡುವ ಯೋಚನೆ ಕೂಡ ಮಾಡುವುದಿಲ್ಲ. ನಾಗರೀಕತೆಯ ಹೆಸರಿನಲ್ಲಿ ಪರಿಸರವನ್ನು ನುಂಗಿ ನೀರು ಕುಡಿಯುವ ಕೆಲಸ ನಡೆಯುತ್ತಿದೆ. ಆಧುನಿಕ ಅವಿಷ್ಕಾರದ ಹೆಸರಿನಲ್ಲಿ ಅನೇಕ ಜೀವ ಪ್ರಭೇದಗಳನ್ನೇ ನಾಶ ಮಾಡಲು ಹೊರಟಿದ್ದೇವೆ. ನಾವು ಚಿಕ್ಕ ಮಕ್ಕಳಾಗಿ ಇದ್ದಾಗ ಗುಬ್ಬಿಪಕ್ಷಿಗಳು ಸಿಕ್ಕಾಪಟ್ಟೆ ಇರುತ್ತಿದ್ದವು, ಹದ್ದುಗಳು ಅಧಿಕವಾಗಿ ಕಾಣಿಸುತ್ತಿದ್ದವು. ಆದರೆ ಇತ್ತೀಚಿಗೆ ಅವುಗಳ ದರ್ಶನ ಸಿಗುವುದೇ ಕಷ್ಟವಾಗಿದೆ.

ಈಗ ನನ್ನನ್ನು ಕಾಡುವ ವಿಷಯವೆಂದರೆ ನಮ್ಮ ಪೂರ್ವಿಕರಲ್ಲಿ ಇದ್ದ ಪಕ್ಷಿ-ಪ್ರಾಣಿದಯೆ ನಮಗೆ ಏಕೆ ಇಲ್ಲ. ಅವರು ಶಾಲೆಗೆ ಹೋಗಲಿಲ್ಲ ಯಾವ ಡಿಗ್ರಿ ತೆಗೆದುಕೊಂಡಿಲ್ಲ ಆದರೆ ಅವರಲ್ಲಿ ಮಾನವೀಯ ಗುಣವಿತ್ತು. ಪರಿಸರದ ಬಗ್ಗೆ ಕಾಳಜಿ ಇತ್ತು. ಪ್ರಾಣಿ ಪಕ್ಷಿಗಳನ್ನು ಪ್ರೀತಿಯಿಂದ ಕಾಣುತ್ತಿದ್ದರು. ನಮ್ಮ ಹಳ್ಳಿಗಳ ಕಡೆ ಒಂದು ಮಾತು ಹೇಳುತ್ತಾರೆ "ಫಲದ ಮರ ಹಾಕಿ ಪಾಪ ಕಳೆದುಕೊಳ್ಳಬೇಕು". ಅಂದರೆ ಹಣ್ಣಿನ ಮರಗಳನ್ನು ಹಾಕಬೇಕು ಅದರಲ್ಲಿ ಬಿಡುವ ಹಣ್ಣುಗಳನ್ನು ನಾವು ತಿನ್ನಬೇಕು. ಜೊತೆಗೆ ಪ್ರಾಣಿ-ಪಕ್ಷಿಗಳು ತಿನ್ನಲಿ ಎನ್ನುವುದು ಅದರ ಉದ್ದೇಶ. ಆವರಲ್ಲಿ ಅಂತಹ ಒಳ್ಳೆಯ ಬುದ್ಧಿ ಇತ್ತು. ನಾವು ಕಲಿತವರು ಡಿಗ್ರಿ ಪಡೆದವರು ನಮಗೆ ಅಂತಹ ಒಳ್ಳೆ ಬುದ್ಧಿ ಏಕಿಲ್ಲ. ಮುಂದೆ ಅಂತಹ ಒಳ್ಳೆ ಬುದ್ಧಿ ನಮ್ಮ ನಿಮ್ಮೆಲ್ಲರಿಗೂ ಬರಲಿ ನಾವು ಬದುಕೋಣ ಇತರ ಜೀವಸಂಕುಲವನ್ನು ಬದುಕಲು ಬಿಡೋಣ.



- ಜೆ. ಅಶೋಕ್ ಕುಮಾರ್






ಓಹ್ ಏನಿದು...! ಯಾವುದೋ ಆನಿಮೇಟೆಡ್ ಸಿನಿಮಾದಲ್ಲಿ ನೋಡುವ ಹಾಗೆ ಮೊಟ್ಟೆಗಳು ಓಡಾಡುತ್ತವೆಯೇ ಅಥವಾ "ಹೀಗೂ ಉಂಟೆ" ಕಾರ್ಯಕ್ರಮದಲ್ಲಿ ಬರಬೇಕಾದದ್ದು ಇಲ್ಲಿ ಬಂದಿದೆಯೇ ಅಂತ ತಿಳಿಯಬೇಡಿ. ಈ ಮುಂದೆ ಹೇಳುದುದೆಲ್ಲವೂ ಸತ್ಯನೇ "ಕೆಂಪು ಕಣ್ಣಿನ ಮರಗಪ್ಪೆ" ಗೆ ಸಂಬಂಧಿಸಿದ್ದು.




ಗೊದಮೊಟ್ಟೆ ಮತ್ತು ಕೆಂಪುಕಣ್ಣಿನ ಮರಗಪ್ಪೆ

ಮರಗಪ್ಪೆಗಳ ಗೊದಮೊಟ್ಟೆಗಳು ಅಪಾಯಗಳಿಂದ ಪಾರಾಗುವ ಚತುರ ಮೊಟ್ಟೆಗಳು. ಇವು ಇರುವ ಜಾಗಗಳು ಕೆಲಬಾರಿ ನಾವು ನೋಡಲೂ ಸಹ ಅಪಾಯಕಾರಿ ಹಾಗೂ ಅಶ್ಚರ್ಯಗೊಳಿಸುವುವು. ಈ ಕೆಂಪು ಕಣ್ಣಿನ ಮರಗಪ್ಪೆ (Red-eyed Tree Frog) ಗಳ ಮೊಟ್ಟೆಗಳು ಸಾಮಾನ್ಯವಾಗಿ ಎಲೆಗಳ ಹಿಂಬದಿಯಲ್ಲಿ ಇರುತ್ತವೆ. ಇವು ಕಾಣಸಿಗುವುದೂ ಕಷ್ಟ ಸಾಧ್ಯ. ಆದರೆ ಜೀವಜಾಲದಲ್ಲಿ ಒಬ್ಬರಿಗಿಂತ ಒಬ್ಬರು ಬುದ್ಧಿವಂತ ಹಾಗೂ ಪ್ರತಿಭಾನ್ವಿತರೇ. ಅಂತಹ ಗೊದಮೊಟ್ಟೆಗಳನ್ನೂ ಸಹ ಕೆಲ ಪ್ರಾಣಿಗಳು ಹುಡುಕಿ ತಮ್ಮ ಆಹಾರವಾಗಿಸುವುವು.

ಹೇಗೇ ಉಪಾಯಮಾಡಿದರೂ ಅಪಾಯ ತಪ್ಪಿದ್ದಲ್ಲ ಎಂಬುದು, ಆ ಗೊದಮೊಟ್ಟೆಗಳು ಅಕಾಲಿಕವಾಗಿ ಒಡೆಯುತ್ತವೆ (Pre mature Hatch) ಹಾಗೂ ಅವುಗಳಿಗೆ ಅಪಾಯ ಬಂದಾಗ ಅವುಗಳಲ್ಲಿ ಒಂದಕ್ಕೆ ತಿಳಿದರೂ ಮೊಟ್ಟೆಯ ಸುತ್ತಲೂ ಇರುವ ಲೋಳೆಯ ಒಳಗೇ ಅಲುಗಾಡಿ ಉಳಿದ ಮೊಟ್ಟೆಗಳಿಂದ ಒಂದು ಭಾಗವನ್ನು ಬೇರ್ಪಡಿಸಿ ಬೇರೆಯಕಡೆಗೆ ಚಲಿಸಿ ಅಥವಾ ಕೆಳಗೆ ಬೀಳುವುದರ ಮೂಲಕ ಅಪಾಯದಿಂದ ತಪ್ಪಿಸಿಕೊಳ್ಳುತ್ತವೆ.



ಮೊಟ್ಟೆಗಳನ್ನು ತಿನ್ನುತ್ತಿರುವ ಹಾವು ಹಾಗೂ ಬೇರ್ಪಡುತ್ತಿರುವ ಕೆಲ ಗೊದಮೊಟ್ಟೆಗಳು

ಈ ಸಂದರ್ಭದಲ್ಲಿ ಅವಕ್ಕೆ ಸಹಾಯವಾಗುವಂತೆ ಒಂದು ರಸಾಯನಿಕ ದ್ರವ್ಯ ಉತ್ಪತಿಯಾಗಿ ಆ ಅಂಟಿನಿಂದ ಬೇರಾಗಲು ಸಹಾಯ ಮಾಡುತ್ತವೆಯಂತೆ. ಏನೇ ಆದರೂ ಪ್ರಕೃತಿಯಲ್ಲಿನ ಹಲವಾರು ವಿಚಿತ್ರ ರಹಸ್ಯಗಳಿಗೆ ಇದೂ ಒಂದು ಸಾಕ್ಷಿಯೇ.

ಚಿತ್ರಗಳು ಮತ್ತು ಮೂಲ ಲೇಖನ : Science News for Students (student.societyforscience.org)



- ಜೈಕುಮಾರ .ಆರ್



# ನಾನು ನೀನುಗಳಿಲ್ಲ

ಜೀವ ಜಲದೊಳಗೆ
ಉಸಿರ ಗಾಳಿಯೊಳಗೆ
ಅನ್ನದ ಕಣದೊಳಗೆ
ನಾನು ನೀನುಗಳಿಲ್ಲ.

ಗುರುತ್ವ ಕಾಂತೆಯೊಳಗೆ
ರಚನೆ ವಿನ್ಯಾಸದೊಳಗೆ
ದೇಹ ಪ್ರಕೃತಿಯೊಳಗೆ
ನಾನು ನೀನುಗಳಿಲ್ಲ.



ಅಸಂಖ್ಯಾ ವಿಧದೊಳಗೆ
ದೃಷ್ಠಿ ಸಂಚಲನದೊಳಗೆ
ತರಂಗ ಸಂವೇದನೆಯೊಳಗೆ
ನಾನು ನೀನುಗಳಿಲ್ಲ.

ಇಂದ್ರೀಯಗಳ ಗ್ರಹಿಕೆಯೊಳಗೆ
ರಾಸಾಯನದ ಕ್ರಿಯೆಯೊಳಗೆ
ಭೌತದ ಜಡದೊಳಗೆ
ನಾನು ನೀನುಗಳಿಲ್ಲ.

ಮೂಲ ಧಾತುವಿನೊಳಗೆ
ಸಕಲ ಕಣ ಸಂಯೋಜನದೊಳಗೆ
ಅಪರಿಮಿತ ಪರಿಧಿಯೊಳಗೆ
ನಾನು ನೀನುಗಳಿಲ್ಲ.



- ಕೃಷ್ಣನಾಯಕ್

# ಪ್ರಕೃತಿ ಬಿಂಬ



*ಈ ಪ್ರಪಂಚದಲ್ಲಿ ನಾವು ಬದುಕೂಳಿಯಲು ಈ ಛದ್ಮವೇಶ ಬೇಕೇ ಬೇಕು. . .!*



*ಈ ಬಣ್ಣದ ಲೋಕದಲ್ಲಿ ನಾವೂ ಕೂಡ ಇದ್ದೇವೆ. . .!*

*- ವಿಪಿನ್ ಬಾಳಿಗ*

